ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಕ್ರೈಸ್ ಸಂಸ್ಥೆಯ ಅಡಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ಸಮಸ್ಯೆ ಕುರಿತು

ಶ್ರೀ ಅರುಣ ಶಹಾಪುರ(ಶಿಕ್ಷಕರ ಕ್ಷೇತ್ರ) –

03 (02) ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಸಮಾಜ ಕಲ್ಯಾಣ ಇಲಾಖೆಯ ಅಧೀನದ ಕ್ರೈಸ್ ಸಂಸ್ಥೆಯ ವಸತಿ ಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಖಾಯಂ ನೌಕರರಿಗೆ ಮರಣ ಉಪದಾನ (ಡಿ.ಸಿ.ಆರ್.ಜಿ) ಸೌಲಭ್ಯ ನೀಡದಿರುವುದಕ್ಕೆ ಕಾರಣಗಳೇನು;

(ಆ) ಸದರಿ ಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಖಾಯಂ ನೌಕರರಿಗೆ ಇ.ಜಿ.ಐ.ಎಸ್. (ಎಂಪ್ಲಾಯ್ ಗ್ರಾಚ್ಯೂಟಿ ಇನ್ಸೂರೆನ್ಸ್ ಸ್ಕೀಮ್) ಮೊತ್ತ ನೀಡಲಾಗುತ್ತಿದೆಯೇ ಈ ಮೊತ್ತದ ಪ್ರಮಾಣ ಎಷ್ಟು ಇಂದಿನವರೆವಿಗೂ ಎಷ್ಟು ಮೃತ ನೌಕರರಿಗೆ ಈ ಸೌಲಭ್ಯ ನೀಡಿದೆ;

(ಇ) ಸದರಿ ಶಾಲೆಗಳಲ್ಲಿ ಸೇವೆ ಸಲ್ಲಿಸಿ ಇಲ್ಲಿಯವರೆಗೂ ನಿಧನರಾದ ನೌಕರರ ಸಂಖ್ಯೆ ಎಷ್ಟು; ನಿಧನರಾದ ನೌಕರರ ಕುಟುಂಬಕ್ಕೆ ಸರ್ಕಾರ/ಕ್ರೈಸ್ ಸಂಸ್ಥೆ ನೀಡಿರುವ ಪರಿಹಾರದ ಮೊತ್ತ ಎಷ್ಟು ಹಾಗೂ ಫಲಾನುಭವಿಗಳ ಸಂಖ್ಯೆ ಎಷ್ಟು ಮತ್ತು ಯಾರು ಯಾರು; ಅನುಕಂಪದ ಆಧಾರಿತ ಸೇವೆ ನೀಡಿದ ವಿವರಗಳನ್ನು ನೀಡುವುದು; ನೀಡದೇ ಇದ್ದಲ್ಲಿ, ಕಾರಣಗಳೇನು;

(ಈ) ಕ್ರೈಸ್ ಸಂಸ್ಥೆಯ ವಸತಿ ಶಾಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಾಯಂ ಬೋಧಕ/ಬೋಧಕೇತರರಿಗೆ ಜ್ಯೋತಿ ಸಂಜೀವಿನಿ ಯೋಜನೆ ಹಾಗೂ ನಗದು ರಹಿತ ಸೌಲಭ್ಯಗಳನ್ನು ನೀಡಲಾಗುತ್ತಿದೆಯೇ; ನೀಡದಿದ್ದಲ್ಲಿ ಕಾರಣಗಳೇನು? (ಸಂಪೂರ್ಣ ಮಾಹಿತಿಯೊಂದಿಗೆ ವಿವರವನ್ನು ನೀಡುವುದು)